# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 484
ಸದಸ್ಯರ ಹೆಸರು : ಶ್ರೀ ಎಸ್. ನಾಗರಾಜ್ (ಸಂದೇಶ ನಾಗರಾಜ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 09-03-2020
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ನಂಜನಗೂಡು ಪಟ್ಟಣದ ರಾಷ್ಟ್ರಪತಿ ರಸ್ತೆಯಲ್ಲಿರುವ 77 ವರ್ಷಗಳ ಹಳೆಯದಾದ ಸರ್ಕಾರಿ ಬಾಲಕರ ಪ್ರೌಢಶಾಲೆಯನ್ನು ಜೀರ್ಣೋದ್ಧಾರ ಮಾಡಿ ಪುನರ್ ನಿರ್ಮಾಣ ಕ್ರಮ ಜರುಗಿಸಲಾಗುವುದೇ: | ಶಿಥಿಲಗೊಂಡಿರುವ / ಹಳೆಯ ಸರ್ಕಾರಿ ಶಾಲೆಗಳನ್ನು ಅನುದಾನದ ಲಭ್ಯತೆಗೆ ಅನುಗುಣವಾಗಿ ಹಂತ ಹಂತವಾಗಿ ಜೀರ್ಣೋದ್ಧಾರ / ಪುನರ್‌ನಿರ್ಮಾಣ ಮಾಡಲಾಗುತ್ತಿದೆ. |
| (ಆ) | ಈ ಶಾಲೆಗೆ ಇತ್ತೀಚಿಗೆ ಕಿಡಿಗೇಡಿಗಳು ಬೆಂಕಿ ಹಚ್ಚಿದ ದಾಖಲೆಗಳು ಸುಟ್ಟು ಹೋಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ದಾಖಲೆಗಳನ್ನು ಪುನರ್ ಸೃಷ್ಟಿಸಲು ಕ್ರಮ ತೆಗೆದು ಕೊಳ್ಳಲಾಗಿದೆಯೇ: ಶಾಲಾ ಆವರಣವನ್ನು ಬೇರೆಯವರು ಪ್ರವೇಶಿಸದಂತೆ ಬಿಗಿಗೊಳಿಸಲಾಗುವುದೇ; | ಈ ಶಾಲೆಗೆ ಇತ್ತೀಚೆಗೆ ಕಿಡಿಗೇಡಿಗಳು ಬೆಂಕಿ ಹಚ್ಚಿರುವುದು ನಿಜ. ಆದರೆ ಖಾಲಿ ಇರುವ ಕೊಠಡಿಗೆ ಬೆಂಕಿ ಹಚ್ಚಿದ್ದು ಯಾವುದೇ ದಾಖಲೆಗಳು ಸುಟ್ಟು ಹೋಗಿರುವುದಿಲ್ಲ ಮತ್ತು ಶಾಲಾ ಆವರಣಕ್ಕೆ ಕಾಂಪೌಂಡ್ ನಿರ್ಮಿಸಿದ್ದು ಸುರಕ್ಷತೆಗೆ ಕ್ರಮ ಕೈಗೊಳ್ಳಲಾಗಿದೆ. |
| (ಇ) | ಶತಮಾನ ದಾಟಿರುವ ನಂಜನಗೂಡು ರಥ ಬೀದಿಯಲ್ಲಿರುವ ದಳವಾಯಿ ಹಿರಿಯ ಪ್ರಾಥಮಿಕ ಶಾಲೆಗೆ ಹೊಂದಿಕೊಂಡಂತ್ತಿರುವ ಬೃಹತ್ ವಿದ್ಯುತ್ ಟ್ರಾನ್ಸ್ ಪಾರ್ಮರ್‌ನ್ನು ಸ್ಥಳಾಂತರಿಸಲು ಶಾಲೆಯ ಆವರಣವನ್ನು ಸ್ವಚ್ಛವಾಗಿಡಲು ಶಾಲೆಗೆ ಸುಣ್ಣಬಣ್ಣ ಮಾಡಿಸಲು ಕ್ರಮ ಜರುಗಿಸಲಾಗುವುದೇ? | ವಿದ್ಯುತ್ ಟ್ರಾನ್ಸ್‌ಫಾರ್ಮರ್ ಅನ್ನು ಸ್ಥಳಾಂತರಿಸಲು ಚೆಸ್ಕಾಂ ನಂಜನಗೂಡು ರವರ ಗಮನಕ್ಕೆ ತರಲಾಗಿದೆ. ಹಾಗೂ ಶಾಲೆಗೆ ಸುಣ್ಣ-ಬಣ್ಣ ಮಾಡಿಸಲಾಗಿದೆ. ಶಾಲಾ ಆವರಣವನ್ನು ಸ್ವಚ್ಚವಾಗಿಡಲಾಗಿದೆ. |

ಇಪಿ 53 ಯೋಸಕ 2020

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು